# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : **642 (713)**
2. ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಮಾನ್ಯ ಶ್ರೀ ಕೆ. ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)
3. ಉತ್ತರಿಸಬೇಕಾದ ದಿನಾಂಕ : 05.03.2021
4. ಉತ್ತರಿಸಬೇಕಾದ ಸಚಿವರು : ಮಾನ್ಯ ಮೂಲಸೌಲಭ್ಯ ಅಭಿವೃದ್ಧಿ, ಹಜ್ ಮತ್ತು ವಕ್ಫ್ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಕೈಗೊಂಡಿರುವ ಮೂಲಭೂತ ಸೌಕರ್ಯಗಳ ಯೋಜನೆಗಳ ಅನುಷ್ಠಾನಗಳಲ್ಲಿ ಅಗತ್ಯವಿರುವ ಕಾರ್ಯಸಾಧ್ಯತೆ ಅಂತರ ನಿಧಿ (Viability Gap Fund)ಯನ್ನು ತೊಡಗಿಸಲು ಕೇಂದ್ರ ಸರ್ಕಾರ ರೂ.8 ಸಾವಿರ ಕೋಟಿಗಳ ನಿಧಿಯನ್ನು ಸ್ಥಾಪಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ನಿಧಿಯಲ್ಲಿ ರೂ.8 ಸಾವಿರ ಕೋಟಿಗಳ ಮೊತ್ತವು ಇರುವ ವಿವರಗಳ ಬಗ್ಗೆ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಮಾಹಿತಿ ಇರುವುದಿಲ್ಲ.<br><br>ಆದರೆ, ಡಿಸೆಂಬರ್-2020ರಲ್ಲಿ ಹೊರಡಿಸಿದ ಪರಿಷ್ಕೃತ ಕಾರ್ಯಸಾಧ್ಯತಾ ಅಂತರ ನಿಧಿ (Viability Gap Fund) ಸ್ಕೀಮ್‌ನ ಮಾಹಿತಿಯನ್ನು ಅಧಿಸೂಚನೆಯ ಪತ್ರದೊಂದಿಗೆ ರಾಜ್ಯ ಸರ್ಕಾರಕ್ಕೆ ಕಳುಹಿಸಿದೆ. |
| (ಆ) | ಬಂದಿದ್ದಲ್ಲಿ ಈ ನಿಧಿಯಿಂದ ರಾಜ್ಯದಲ್ಲಿ ಮೂಲಭೂತ ಸೌಕರ್ಯ ಕಲ್ಪಿಸುವ ಉದ್ದೇಶದಿಂದ ಯಾವ ಯಾವ ಯೋಜನೆಗಳಿಗೆ ಅನುದಾನ ಪಡೆದಿದೆ: (ವಿವರ ನೀಡುವುದು) | ಡಿಸೆಂಬರ್-2020ರಲ್ಲಿ ಹೊರಡಿಸಿರುವ ಪರಿಷ್ಕೃತ ಕಾರ್ಯಸಾಧ್ಯತಾ ಅಂತರ ನಿಧಿ (Viability Gap Fund) ಸ್ಕೀಮ್‌ನಡಿ ತೆಗೆದುಕೊಳ್ಳಲು ರಾಜ್ಯವು ಉದ್ದೇಶಿಸಿರುವ ಮೂಲಭೂತ ಸೌಕರ್ಯ ಯೋಜನೆಗಳ ವಿವರಗಳು ಯಾವುದೂ ಇರುವುದಿಲ್ಲ. |
| (ಇ) | ಕೇಂದ್ರ ಸರ್ಕಾರ ಕೆಲವು ರಾಜ್ಯಗಳಲ್ಲಿ ಕೆಲವೊಂದು ಮೂಲಭೂತ ಸೌಕರ್ಯ ಕಲ್ಪಿಸುವ ಯೋಜನೆಗಳನ್ನು ಪ್ರಾಯೋಗಿಕ ಯೋಜನೆ (Pilot Project)ಗಳಾಗಿ ಕೈಗೆತ್ತಿಕೊಂಡಿರುವುದು ನಿಜವೇ;? | ಹೌದು.<br><br>ಆದರ, ಸಾಮಾನ್ಯವಾಗಿ ಇದು ಎಲ್ಲಾ ರಾಜ್ಯಗಳಿಗೂ ಅನ್ವಯವಾಗುವಂತಿದೆ. |

| | | |
|---|---|---|
| (ಈ) | ಹಾಗಿದ್ದಲ್ಲಿ, ರಾಜ್ಯದಲ್ಲಿ ಕೈಗೊಂಡಿರುವ ಪ್ರಾಯೋಗಿಕ ಯೋಜನೆಗಳಾವುವು: (ವಿವರ ನೀಡುವುದು) | ರಾಜ್ಯವು ಕೈಗೊಳ್ಳುವ **<u>ಸಾಮಾಜಿಕ ವಲಯದ</u>** ಮೂಲಸೌಲಭ್ಯ ಪ್ರಾಯೋಗಿಕ ಯೋಜನೆಗಳನ್ನು ಗುರುತಿಸಿ ವಿವರಗಳನ್ನು ಕಳುಹಿಸುವಂತೆ ಕೇಂದ್ರ ಸರ್ಕಾರವು ಕೋರಿದೆ. ಅದರಂತೆ, ಸಾಮಾಜಿಕ ವಲಯದಡಿ ಬರುವ ಪ್ರಾಯೋಗಿಕವಾಗಿ ಪ್ರಸ್ತಾಪಿಸಬಹುದಾದ / ತೆಗೆದುಕೊಳ್ಳಬಹುದಾದ ಮೂಲಸೌಲಭ್ಯ ಯೋಜನೆಗಳನ್ನು ಗುರುತಿಸಿ, ಅವುಗಳ ವಿವರಗಳನ್ನು ಒದಗಿಸುವಂತೆ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯು ಸಂಬಂಧಪಟ್ಟ ಆಡಳಿತ ಇಲಾಖೆಗಳನ್ನು ಕೋರಿದ್ದು, ವಿವರಗಳನ್ನು ನಿರೀಕ್ಷಿಸಿದೆ. |
| (ಉ) | ಕೇಂದ್ರ ಸರ್ಕಾರ ಈ ಕಾರ್ಯಸಾಧ್ಯತೆ ಅಂತರ ನಿಧಿ (Viability Gap Fund) ಯೋಜನೆಯನ್ನು 2025ರ ಇಸವಿಯವರೆಗೆ ವಿಸ್ತರಿಸಿರುವುದು ನಿಜವೇ? | ಡಿಸೆಂಬರ್-2020ರಲ್ಲಿ ಹೊರಡಿಸಿರುವ ಪರಿಷ್ಕೃತ ಕಾರ್ಯಸಾಧ್ಯತಾ ಅಂತರ ನಿಧಿ (Viability Gap Fund) ಸ್ಕೀಮ್‌ನ ಅಧಿಸೂಚನೆಯೊಂದಿಗೆ ಕೇಂದ್ರ ಸರ್ಕಾರವು ಒದಗಿಸಿರುವ ಮಾಹಿತಿಯಲ್ಲಿ ಸ್ಕೀಮ್‌ನ ಅವಧಿಯ ಕುರಿತ ವಿವರಗಳಿರುವುದಿಲ್ಲ. |

ಸಂಖ್ಯೆ: ಐಡಿಡಿ 42 ಐಟಿಎಸ್ 2021

**(ಆನಂದ್ ಸಿಂಗ್)**
ಮೂಲಸೌಲಭ್ಯ ಅಭಿವೃದ್ಧಿ,
ಹಜ್ ಮತ್ತು ವಕ್ಫ್ ಸಚಿವರು